8. ಸುಪ್ರಸಿದ್ಧ ಸಂಗೀತ ಕಲಾವಿದರಾದ ಮೈಸೂರು ಚೌಡಯ್ಯ ಹಾಗೂ ಚೆಂಬೈ ವೈದ್ಯನಾಥ ಭಾಗವತರ್ ಈ ಕನ್ನಡ ಚಿತ್ರದಲ್ಲಿ ಜೊತೆಯಾಗಿ ಅಭಿನಯಿಸಿದರು.

ಅ) ಶ್ರೀ ಪುರಂದರದಾಸರು ಆ) ಸಂಸಾರನೌಕೆ ಇ) ಹಂಸಗೀತೆ ಈ) ವಾಣಿ

9. 'ಕಂಡು ಧನ್ಯನಾದನೊ ಉಡುಪಿ ಕೃಷ್ಣನ' ಈ ಕೀರ್ತನೆ ರಚಿಸಿದ ದಾಸಶ್ರೇಷ್ಠರು ಇವರು.

ಅ) ಕನಕದಾಸರು ಆ) ವಾದಿರಾಜರು ಇ) ಸುರಪುರದ ಆನಂದದಾಸರು ಈ) ವಿಜಯದಾಸರು

10) ಜೈನರ ಪವಿತ್ರಕ್ಷೇತ್ರ ಸಮ್ಮೇದಗಿರಿ ಇಲ್ಲಿದೆ

ಅ) ಶ್ರವಣ ಬೆಳಗೊಳದಲ್ಲಿ ಆ) ರಾಜಸ್ಥಾನದ ಅಬು ಪರ್ವತದಲ್ಲಿ ಇ) ಗುಜರಾತಿನ ಗಿರ್ನಾರದಲ್ಲಿ ಈ) ಬಿಹಾರದ ಹಜಾರಿಭಾಗ್ ಜಿಲ್ಲೆಯಲ್ಲಿ

**ಉತ್ತರಗಳಿಗಾಗಿ ಮುಂದಿನ ಸಂಚಿಕೆ ನೋಡಿ**

ಪ್ರಶ್ನೆಗಳಿಗೆ ಉತ್ತರಗಳನ್ನು ಈಗಲೇ ಯೋಚಿಸಿ ಕೂಡಲೇ ಗುರುತಿಸಿ ನಾಳೆಯ ಅಂಚೆಯಲ್ಲಿ ನಮಗೆ ಕಳುಹಿಸಿರಿ. ನಿಮ್ಮ ಉತ್ತರಗಳು ಕಸ್ತೂರಿಯ ರಸಪ್ರಶ್ನೆ ಅಂಕಣದ ಪುಟದಲ್ಲಿಯೇ ಇರಲಿ. ಕೈಬರಹದ ಉತ್ತರಗಳನ್ನು (ಹಸ್ತಪ್ರತಿ) ಪರಿಗಣಿಸಲಾಗುವುದಿಲ್ಲ.

ನಮ್ಮ ವಿಳಾಸ
ಸಂಪಾದಕರು ಕಸ್ತೂರಿ, ಸಂಯುಕ್ತ ಕರ್ನಾಟಕ ಕಾರ್ಯಾಲಯ
ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-580020

**100 ರೂ.ಗಳ ಎರಡು ಬಹುಮಾನಗಳು! ಜತೆಗೆ ಸಮಾಧಾನಕರ ಬಹುಮಾನ ರೂಪದಲ್ಲಿ ಒಂದು ವರ್ಷ 'ಕಸ್ತೂರಿ' ಸಂಚಿಕೆಗಳು ಉಚಿತ!**

ಹೆಸರು..................................................................................

ವಿಳಾಸ..................................................................................

..................................................................................



**ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮಕ್ಕಿಂತ (1857) ಇಪ್ಪತ್ತು ವರ್ಷ ಮೊದಲೇ, ಅಂದರೆ 1837 ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಶಸ್ತ್ರ ಸ್ವಾತಂತ್ರ್ಯ ಹೋರಾಟ ನಡೆದು, ಬ್ರಿಟಿಷರನ್ನು ಮಂಗಳೂರಿನಿಂದ ಕೆಲ ಕಾಲದ ಮಟ್ಟಿಗೆ ಓಡಿಸಲಾಗಿತ್ತು, ಕ್ರಾಂತಿಯ ಮುಂದಾಳುಗಳಿಗೆ ಸಿಕ್ಕಿದ ಜನ ಮನ್ನಣೆ ಮತ್ತು ಬೆಂಬಲ ಬ್ರಿಟಿಷರಿಗೆ ಆಘಾತವನ್ನುಂಟು ಮಾಡಿತ್ತು.**

# ದಕ್ಷಿಣ ಕನ್ನಡದ ಸ್ವಾತಂತ್ರ್ಯ ಸಮರ

........ಡಾ. ಬಿ. ಜನಾರ್ದನ ಭಟ್

ದಕ್ಷಿಣ ಕನ್ನಡದ ಸ್ವಾತಂತ್ರ್ಯ ಹೋರಾಟವನ್ನು ಇತಿಹಾಸ ಪಠ್ಯಪುಸ್ತಕಗಳಲ್ಲಿ (ಉದಾಹರಣೆಗೆ, ಈಗಿನ ದ್ವಿತೀಯ ಪಿ.ಯು.ಸಿ. ಪಠ್ಯಪುಸ್ತಕಗಳಲ್ಲಿ) 'ಕೊಡಗು ಬಂಡಾಯ', 'ಕೊಡಗು-ಕೆನರಾ ಬಂಡಾಯ' ಎಂದು ಚಿಕ್ಕದಾಗಿ, ಅಪೂರ್ಣ ಅಥವಾ ತಪ್ಪು ಮಾಹಿತಿಗಳಿಂದ ವರ್ಣಿಸಲಾಗುತ್ತಿದೆ. ಇನ್ನೊಂದು ಕಡೆ, ಇದನ್ನು 'ಅಮರ ಸುಳ್ಯದ ಸ್ವಾತಂತ್ರ್ಯ ಸಮರ' ಎಂದು ಹೆಸರಿಸಿ, ಈ ಹೋರಾಟದ ನೆನಪನ್ನು ಹಸಿರಾಗಿರಿಸುವ ಶ್ಲಾಘನೀಯ ಪ್ರಯತ್ನವೊಂದು ದಕ್ಷಿಣ ಕನ್ನಡದ ಸುಳ್ಯದಲ್ಲಿ ನಡೆಯುತ್ತಿದೆ. ಆದರೆ ಈ ಹೋರಾಟವನ್ನು 'ದಕ್ಷಿಣ ಕನ್ನಡದ ಸ್ವಾತಂತ್ರ್ಯ ಸಮರ' ಎಂದೇ ಕರೆಯುವುದು ಸೂಕ್ತವಾಗಿದೆ. ಈ ಕ್ರಾಂತಿಯ ವಿವರಗಳನ್ನು ಗಮನಿಸಿದರೆ ಅದು ಸ್ಪಷ್ಟವಾಗುತ್ತದೆ.

## ಕ್ರಾಂತಿಯ ಹಿನ್ನೆಲೆ

1804ರಲ್ಲಿ ಈಗಿನ ಬೆಳ್ತಂಗಡಿ, ಪುತ್ತೂರು ಮತ್ತು ಬಂಟ್ವಾಳ ತಾಲೂಕುಗಳು ('ಅಮರ ಸುಳ್ಯ' ಅಥವಾ ಆಗಿನ ಬಂಟ್ವಾಳ ತಾಲೂಕು) ಕೊಡಗಿಗೆ ಸೇರಿಸಲ್ಪಟ್ಟಿದ್ದವು. ಆಗ ಕೊಡಗಿನ ಅರಸರ ಆಳ್ವಿಕೆಯಲ್ಲಿ ಸುಖಿವಾಗಿದ್ದ ಈ ಭಾಗದ ರೈತರಿಗೆ 1834 ರಲ್ಲಿ ಕೊಡಗಿನ ರಾಜ ಚಿಕವೀರರಾಜನ ಪದಚ್ಯುತಿಯ ನಂತರ ಸಮಸ್ಯೆ ಉಂಟಾಯಿತು. ಆಗ ಕೊಡಗನ್ನು ತಾವೇ ಆಳಲಾರಂಭಿಸಿದ ಬ್ರಿಟಿಷರು ಅಮರಸುಳ್ಯ ಪ್ರದೇಶ ಅಥವಾ 'ಕೆಳಕೊಡಗನ್ನು' ಕೆನರಾ ಜಿಲ್ಲೆಗೆ (ದಕ್ಷಿಣ ಕನ್ನಡಕ್ಕೆ) ಸೇರಿಸಿದರು. ವಸ್ತು ರೂಪದ ತೆರಿಗೆಯನ್ನು ನಿಷೇಧಿಸಿ ಹಣದ ರೂಪದಲ್ಲೇ ತೆರಿಗೆ ನೀಡಬೇಕೆಂದು ಬ್ರಿಟಿಷರು ವಿಧಿಸಿದಾಗ ರೈತರಲ್ಲಿ ಅಸಹನೆ ಉಂಟಾಯಿತು.

ಅದೇ ವೇಳೆಗೆ ಕೊಡಗಿನ ರಾಜವಂಶದ (ಚಿಕವೀರರಾಜನ ದೊಡ್ಡಪ್ಪ) ಅಪ್ಪಾಜಿ ಅರಸನ ಪ್ರಥಮ ಪುತ್ರನೆಂದು ಹೇಳಿಕೊಂಡ ಅಪರಂಪಾರ ಸ್ವಾಮಿ ಎಂಬವನು ಸಿಂಹಾಸನಕ್ಕೆ ಹಕ್ಕು ಮಂಡಿಸಲು ಜನ ಬೆಂಬಲವನ್ನು ಸಂಘಟಿಸತೊಡಗಿದನು. 1835 ರಲ್ಲಿ ಅಪ




ದಕ್ಷಿಣ ಕನ್ನಡದಲ್ಲಿ ಸ್ವಾತಂತ್ರ್ಯ ಸಮರದ ಪ್ರಮುಖ ಕೇಂದ್ರಗಳು

ನನ್ನು ಬ್ರಿಟಿಷರು ಬಂಧಿಸಿದರು. ನಂತರ ಅಪ್ಪಾಜಿ ಅರಸರ ಎರಡನೆಯ ಪುತ್ರನೆಂದು ಹೇಳಿಕೊಂಡ ಕಲ್ಯಾಣ ಸ್ವಾಮಿ ಕ್ರಾಂತಿಯೊಂದನ್ನು ಸಂಘಟಿಸತೊಡಗಿದನು. 1836ರಲ್ಲಿ ಅವನನ್ನು ಬ್ರಿಟಿಷರು ಸೆರೆ ಹಿಡಿ ದರು. ಆಗ ಕ್ರಾಂತಿಯೊಂದನ್ನು ಸಂಘಟಿಸಲು ತೊಡಗಿದ್ದ ನಾಯಕರು ಪುಟ್ಟ ಬಸಪ್ಪ ಎಂಬವನಿಗೆ ಕಲ್ಯಾಣಸ್ವಾಮಿಯ ವೇಷ ತೊಡಿಸಿ ಅವನನ್ನು ಕೊಡಗಿನ ರಾಜನೆಂದು ದಕ್ಷಿಣ ಕನ್ನಡದ ಜನರಿಗೆ ಪರಿಚಯಿಸುತ್ತ ಕ್ರಾಂತಿಗೆ ಬೆಂಬಲವನ್ನು ಕ್ರೋಢೀಕರಿಸಲು ಪ್ರಾರಂಭಿಸಿದರು. ಅವನಿಗೆ ಪೂಮಲೆ ಕಾಡಿನಲ್ಲಿ ಆಶ್ರಮವೊಂದನ್ನು ಕಟ್ಟಿಕೊಟ್ಟರು. ಮುಂದೆ ಕ್ರಾಂತಿಕಾರಿಗಳು ದಕ್ಷಿಣ ಕನ್ನಡವನ್ನು ಕೆಲ ದಿನಗಳ ಮಟ್ಟಿಗೆ ವಶಪಡಿಸಿಕೊಂಡಿದ್ದಾಗ ಈ ಕಲ್ಯಾಣಸ್ವಾಮಿಯ (ಪುಟ್ಟ ಬಸಪ್ಪನ) ರಾಜ್ಯಭಾರ ಬೆಳ್ಳಾರೆ (ಸುಳ್ಯ ತಾಲೂಕು) ಊರಿನ 'ರಾಜಧಾನಿ'ಯಿಂದ ನಡೆಯಿತು.

### ಕ್ರಾಂತಿಯ ನಾಯಕರು

ಉಬರಡ್ಕದ ಕೆದಂಬಾಡಿ ರಾಮಯ್ಯಗೌಡ, ಅರಕಲಗೂಡಿನ ಹುಲಿ ಕಡಿದ ನಂಜಯ್ಯ, ಬಂಟ್ವಾಳದ ಬೀರಣ್ಣ ರೈ ಅಥವಾ ಬೀರಣ್ಣ ಬಂಟ, ಕೂಜುಗೋಡು ಮಲ್ಲಪ್ಪಗೌಡ, ಬೆಳ್ಳಾರೆಯ ಪೆರಜಿ ಊಕಣ್ಣ ಬಂಟ, ಕುಂಬಳೆ ಸುಬ್ಬಯ್ಯ, ಕುಕನೂರು ಚೆನ್ನಯ್ಯ, ಗುಡ್ಡೆಮನೆ ಅಪ್ಪಯ್ಯ, ಕರಣಿಕ ಸುಬ್ಬಯ್ಯ (ದಿವಾನ್ ಲಕ್ಷ್ಮೀನಾರಾಯಣಯ್ಯನ ಅಳಿಯ ಮತ್ತು ಕೃಷ್ಣ (ದಿವಾನರ ಭಾವ) - ಇವರು ಕ್ರಾಂತಿಕಾರಿಗಳ ತಂಡ ನಾಯಕರಾಗಿದ್ದರು.

ಕೊಡಗಿನ ಅರಸರ ದಿವಾನರಾಗಿದ್ದು ಬ್ರಿಟಿಷರ ಕಾಲದಲ್ಲೂ ಮುಂದುವರಿದಿದ್ದ ಇಬ್ಬರು ದಿವಾನರಲ್ಲಿ ಒಬ್ಬನಾಗಿದ್ದ ಲಕ್ಷ್ಮೀನಾರಾಯಣಯ್ಯ ದಕ್ಷಿಣ ಕನ್ನಡದವನು. ಇನ್ನೊಬ್ಬನಾದ ಬೋಪು ದಿವಾನ ಬ್ರಿಟಿಷರಿಗೆ ನಿಷ್ಠನಾಗಿದ್ದನು. ಮತ್ತೊಬ್ಬ ದಿವಾನ ಚೆಪ್ಪುಡಿರ ಪೊನ್ನಪ್ಪ ಕೂಡ ಜನರನ್ನು ಬ್ರಿಟಿಷರ ಕಡೆಗೆ ಪರಿವರ್ತಿಸುತ್ತಿದ್ದನು. ಈ ಪೈಕಿ ಕ್ರಾಂತಿಕಾರಿಗಳ ಜತೆ ಸಂಬಂಧ ಹೊಂದಿದ್ದು, ಅವರ ಜತೆ ರಹಸ್ಯ ಪತ್ರ ವ್ಯವಹಾರ ಮಾಡುತ್ತಿದ್ದ ಲಕ್ಷ್ಮೀನಾರಾಯಣಯ್ಯನನ್ನು ಕೊಡಗಿನ ಬ್ರಿಟಿಷ್ ಅಧಿಕಾರಿ ಲೀ ಹಾರ್ಡಿ ವಜಾ ಮಾಡಿ ಬಂಧನದಲ್ಲಿಟ್ಟನು.

ದಿವಾನನ ಅಳಿಯ ಕರಣಿಕ ಸುಬ್ಬಯ್ಯನು ಕ್ರಾಂತಿಕಾರಿಗಳ ನಾಯಕ ಕಲ್ಯಾಣಸ್ವಾಮಿಯ (ಪುಟ್ಟ ಬಸಪ್ಪನ) ಕರಣಿಕನಾಗಿ ಕ್ರಾಂತಿಕಾರಿಗಳ ಸರಕಾರ ಹಾಗೂ ಅವರ ವಿಜಯಗಳ ಬಗ್ಗೆ ವೈಭವೀಕೃತ ನಿರೂಪಗಳನ್ನು ಬರೆದು ಊರೂರಿಗೆ ಕಳಿಸಿ ಜನರನ್ನು ಹುರಿದುಂಬಿಸುವಲ್ಲಿ ಪ್ರಮುಖ ಪಾತ್ರ ವಹಿಸಿದನು. ಉದಾಹರಣೆಗೆ ಅವನು 1837ರ ಎಪ್ರಿಲ್ 5 ರಂದು ಮಂಗಳೂರಿನ ನಿವಾಸಿಗಳಿಗೆ ಬರೆದಿದ್ದ ನಿರೂಪ ಹೀಗೆ ಹೇಳುತ್ತದೆ: "ಆಂಗ್ಲರ ವಿರುದ್ಧ ಯುದ್ಧ ಮಾಡಲು ಸ್ವಾಮಿಗಳ ಸೈನಿಕರು ಬಂದಿಳಿದಿದ್ದಾರೆ. ನೀವೆಲ್ಲ ನಮ್ಮೊಂದಿಗೆ ಸೇರಬೇಕೆಂದು ನಿಮಗೆ ಅಪ್ಪಣೆ ಮಾಡಲು ನಾನು ಆಜ್ಞಪ್ತನಾಗಿದ್ದೇನೆ. ನೀವೆಲ್ಲ ನಿಮ್ಮಲ್ಲಿರುವ ಆಯುಧಗಳನ್ನು ಹಿಡಿದು ಬರತಕ್ಕದ್ದು. ನೀವೀ ಆಜ್ಞೆಗೆ ತಪ್ಪಿ ನಡೆದರೆ ನಿಮ್ಮ ಮನೆತನದವರೆಲ್ಲರ ತಲೆಗಳನ್ನೂ ಕತ್ತರಿಸಿ ಹಾಕಲಾದೀತು. ಹನ್ನೆರಡು ಲಕ್ಷ ಸೈನಿಕರ ದಂಡು ಸೇರಲಿದೆ. ಆದಕಾರಣ ನೀವು ತಕ್ಷಣ ಸ್ವಾಮಿಗಳ ಸಹಾಯಕ್ಕೆ ಬಂದು, ಸೈನ್ಯ ಸೇರುವಿರೆಂದು ಸುದ್ದಿಯನ್ನು ಕಳುಹಿಸತಕ್ಕದ್ದು. ಇಲ್ಲವಾದರೆ ಇದರ ದುಷ್ಪರಿಣಾಮಕ್ಕೆ ನೀವು ಗುರಿಯಾಗುವಿರಿ. ನೀವೆಲ್ಲ ಸ್ವಾಮಿಗಳ ಸೈನ್ಯ ಸೇರಿದಿರಾದರೆ, ನಿಮ್ಮನ್ನು ಕಾಪಾಡಲಾಗುತ್ತದೆ. ಈ ನಿರೂಪ ಮುಟ್ಟಿದ ಕೂಡಲೆ ಉತ್ತರ ಬರೆಯತಕ್ಕದ್ದು."

ದಕ್ಷಿಣ ಕನ್ನಡದ ಹಲವು ಊರುಗಳ ಶಾನುಭೋಗರೂ ಸತ್ಯವನ್ನು (ನಿಜಸ್ಥಿತಿಯನ್ನು) ತಿಳಿದೋ ತಿಳಿಯದೆಯೋ ತಮ್ಮ ತಮ್ಮ ಗ್ರಾಮಗಳಲ್ಲಿ ಬ್ರಿಟಿಷರ ಆಡಳಿತ ಕೊನೆಗೊಳ್ಳಲಿದೆ ಎಂಬ ನಿರೀಕ್ಷೆಯನ್ನು ಹುಟ್ಟಿಸಿದ್ದರೆಂದು ಊಹಿಸಲಾಗಿದೆ. ಅಂತೂ ದಕ್ಷಿಣ ಕನ್ನಡದ ಹಲವು ಊರುಗಳಿಂದ ಆಯುಧಧಾರಿಗಳಾದ ರೈತರು ಕ್ರಾಂತಿಕಾರಿಗಳ ಸೈನ್ಯವನ್ನು ಸೇರಿಕೊಳ್ಳುತ್ತಿದ್ದರು. ಕಾರ್ಕಳ, ಮೂಡುಬಿದಿರೆಗಳಂತಹ ಊರುಗಳಲ್ಲಿ ಜನರು ಸನ್ನದ್ಧರಾಗಿ ಕ್ರಾಂತಿಗೆ ಸೇರಲು ಕಾಯುತ್ತಿದ್ದರು.

ಸುಳ್ಯ ಸೀಮೆಯ ಗೌಡ ಜನಾಂಗದ ಮುಖಂಡರು ಸಶಸ್ತ್ರ ಹೋರಾಟಗಾರರನ್ನು ಕೂಡಿಸಿಕೊಂಡು ಬ್ರಿಟಿಷ್ ಆಡಳಿತವನ್ನು ಕೊನೆಗಾಣಿಸಲು ಯೋಜನಾಬದ್ಧವಾಗಿ ಮುನ್ನಡೆದರು. ದೊಡ್ಡ ಗೌಡ ಮನೆತನಗಳು ಮಾತ್ರವಲ್ಲದೆ ಕ್ಷಾತ್ರ ತೇಜಸ್ಸಿನ ಬಂಟ ಸಮಾಜದವರು ಮತ್ತಿತರ ಸಮುದಾಯಗಳೂ ಸಶಸ್ತ್ರ ಕ್ರಾಂತಿಯಲ್ಲಿ ಕೈಗೂಡಿಸಿದ್ದವು. ಹಾಗಾಗಿ ಈ ಕ್ರಾಂತಿ ಸಾಮುದಾಯಿಕವಾಗಿತ್ತು.

### ಹೋರಾಟಗಾರರ ನಡೆ

ಕ್ರಾಂತಿ ಪ್ರಾರಂಭವಾದುದು 1837ರ ಮಾರ್ಚ್ 30 ರಂದು. ಕೆದಂಬಾಡಿ ರಾಮಯ್ಯ ಗೌಡನ ನೇತೃತ್ವದಲ್ಲಿ ಎರಡು ಸಾವಿರ ಜನರು ಬೆಳ್ಳಾರೆಯ ಸರಕಾರಿ ಖಜಾನೆಯನ್ನು ವಶಕ್ಕೆ ತೆಗೆದುಕೊಂಡರು. ಬ್ರಿಟಿಷರ ಪರವಾಗಿದ್ದ (ಎನ್ನಲಾದ) ತುದಿಯಡ್ಕ ರಾಮಪ್ಪನನ್ನು ಕ್ರಾಂತಿಕಾರಿಗಳು ಕೊಂದರು. ಕುಡಕಲ್ಲು ಪುಟ್ಟ ಗೌಡ ಮತ್ತು ಕುಂಚಡ್ಕ ರಾಮಗೌಡರ ನೇತೃತ್ವದಲ್ಲಿ ಇನ್ನೂರು ಜನರ ಒಂದು ತಂಡ ಕಾಸರಗೋಡಿನ ಕಡೆಗೆ

ಹೋಯಿತು. ಅವರು ತಮಗೆ ವಹಿಸಿದ ಕೆಲಸವನ್ನು ಅಚ್ಚುಕಟ್ಟಾಗಿ ನೆರವೇರಿಸುತ್ತಾ ಎಪ್ರಿಲ್ ಎರಡರಂದು ಕಾಸರಗೋಡು, ಮೂರರಂದು ಕುಂಬಳೆ, ನಾಲ್ಕರಂದು ಮಂಜೇಶ್ವರ ಈ ಊರುಗಳಲ್ಲಿದ್ದ ಖಜಾನೆ, ಸರಕಾರಿ ಕಚೇರಿಗಳನ್ನು ವಶಕ್ಕೆ ತೆಗೆದುಕೊಂಡು, ನೌಕರರಿಗೆ ಸಂಬಳ ವಿತರಿಸಿ, ತಮಗೆ ನಿಷ್ಠರಾಗಿರುವಂತೆ ತಾಕೀತು ಮಾಡಿ ಮಂಗಳೂರಿಗೆ ಐದರಂದು ತಲುಪಿದರು. ಅದೇ ವೇಳೆಗೆ ಕ್ರಾಂತಿಕಾರಿಗಳ ಮುಖ್ಯ ಸೈನ್ಯ ಬಂಟವಾಳ ಮಾರ್ಗವಾಗಿ ಮಂಗಳೂರಿಗೆ ಬಂದಿತ್ತು. ನಂದಾವರದ ಅರಸು ಲಕ್ಷ್ಮಪ್ಪ ಬಂಗರಸನೂ ಕ್ರಾಂತಿಕಾರಿಗಳನ್ನು ಸೇರಿಕೊಂಡಿದ್ದನು.

ಇನ್ನೂರು ಜನರ ಎರಡನೆಯ ತಂಡ ಬಿಸ್ಲೆ ಘಾಟಿಯ (ಸುಬ್ರಹ್ಮಣ್ಯದ ಸಮೀಪವಿದೆ) ಮಾರ್ಗವಾಗಿ ಮಡಿಕೇರಿಗೆ ಹೊರಟಿತು. ಆದರೆ ಈ ಸೈನ್ಯದ ಆಗಮನದ ವಿಷಯವನ್ನು ಮೊದಲೇ ಅರಿತಿದ್ದ ಬೋಪು ದಿವಾನ ತನ್ನ ಸೈನ್ಯದೊಂದಿಗೆ ಅವರನ್ನು ಎದುರಿಸಿ ಚದುರಿಸಿದನು. ನಾಯಕರನ್ನು ಸೆರೆ ಹಿಡಿದನು. ಹೀಗೆ ಸೆರೆ ಸಿಕ್ಕಿದ ಮೇಲೆ ಕೊಡಗಿನ ಕ್ರಾಂತಿಕಾರಿ ಗುಡ್ಡೆ ಅಪ್ಪಯ್ಯನಿಗೆ ಮುಂದೆ ಗಲ್ಲು ಶಿಕ್ಷೆಯಾಯಿತು. ಕೊಡಗಿನವರು ಈ ಕ್ರಾಂತಿಯಲ್ಲಿ ಭಾಗವಹಿಸಲು ಹಿಂದೆ ಮುಂದೆ ನೋಡಿದುದಕ್ಕೆ ಕಾರಣ ಅವರಿಗೆ ಅಪರಂಪಾರ ಮತ್ತು ಕಲ್ಯಾಣಸ್ವಾಮಿಗಳ ಬಂಧನದ ವಿಚಾರ ತಿಳಿದಿದ್ದುದೇ ಆಗಿದೆ. ದಕ್ಷಿಣ ಕನ್ನಡದಲ್ಲಿ ನಾಯಕರಿಗೆ ಮಾತ್ರ ಆ ವಿಷಯ ತಿಳಿದಿತ್ತೇ ಹೊರತು ಜನರಿಗೆ ತಿಳಿದಿರಲಿಲ್ಲ.

ಕಲ್ಯಾಣಸ್ವಾಮಿ (ಪುಟ್ಟ ಬಸಪ್ಪ), ಕೆದಂಬಾಡಿ ರಾಮಯ್ಯಗೌಡ, ಬೀರಣ್ಣ ಬಂಟ ಮುಂತಾದವರಿಂದ ಮುಖ್ಯ ಸೈನ್ಯವು ಪುತ್ತೂರಿಗೆ ಬರುವಷ್ಟರೊಳಗೆ ಮಂಗಳೂರಿನ ಕಲೆಕ್ಟರ್ ಲೆವಿನ್ 161 ಮಂದಿ ಸೈನಿಕರೊಡನೆ ಅಲ್ಲಿಗೆ ಬಂದನು (ಮಾರ್ಚ್ 31). ಎಪ್ರಿಲ್ ಎರಡರಂದು ಕ್ರಾಂತಿಕಾರಿಗಳು ಅಲ್ಲಿಗೆ ಬರುವುದನ್ನು ಕಂಡು ಅವನು ಅದೇ ರಾತ್ರಿ ಮಂಗಳೂರಿಗೆ ಪಲಾಯನ ಮಾಡಿದನು. ಕ್ರಾಂತಿಕಾರಿಗಳ ಸಂಖ್ಯೆ 1200 ರಷ್ಟಿತ್ತು ಎಂದು ದಾಖಲೆಗಳು ಹೇಳುತ್ತವೆ. ಕಲೆಕ್ಟರ್‌ಲೆವಿನ್ ಎಪ್ರಿಲ್ 4 ರಂದು ಮಂಗಳೂರು ತಲುಪಿದನು. ಆದರೆ ಮಂಗಳೂರು ನಿರ್ಜನವಾಗಿತ್ತು. ಅಲ್ಲಿ ಉಳಿದಿದ್ದ ಜನರು ಬ್ರಿಟಿಷರಿಗೆ ಸಹಕಾರ ನೀಡಲು ನಿರಾಕರಿಸಿದರು.

ಎಪ್ರಿಲ್ ನಾಲ್ಕರಂದು ಮಂಗಳೂರಿನ ಯುರೋಪಿಯನ್ನರು ಮಂಗಳೂರಿನಿಂದ ಪಲಾಯನ ಮಾಡಲು ತೀರ್ಮಾನಿಸಿದರು. ಖಜಾನೆಯನ್ನು ತಮ್ಮೊಂದಿಗೆ ಒಯ್ಯಲು ನಿರ್ಧರಿಸಿದರು. ಆದರೆ ಖಜಾನೆಯನ್ನು ಕಂಟೋನ್‌ಮೆಂಟಿಗೆ ಸಾಗಿಸಲು ಕೆಲಸಗಾರರು ಸಿಕ್ಕಲಿಲ್ಲ. ಬಹಳ ಕಷ್ಟದಿಂದ ಗೃಹಸ್ಥರೊಬ್ಬರ ಎತ್ತಿನಗಾಡಿಯಲ್ಲಿ ಖಜಾನೆಯನ್ನು ಅಲ್ಲಿಗೆ ಸಾಗಿಸಿದರು. ಯುರೋಪಿಯನ್ನರೆಲ್ಲ ಅಲ್ಲೇ ಸೇರಿ, 'ಕಷ್ಟದಲ್ಲಿದ್ದೇವೆ' ಎಂದು ತಿಳಿಸುವ ಬಾವುಟವನ್ನು ಹಾರಿಸಿದರು. ಅದೃಷ್ಟವಶಾತ್ ಮುಂಬಯಿಯಿಂದ ಮದರಾಸಿಗೆ ಹೋಗುತ್ತಿದ್ದ ಬ್ರಿಟಿಷರ ಒಂದು ಹಡಗು ಅದನ್ನ ಕಂಡು, ಯುರೋಪಿಯನ್ನರನ್ನು, ಹತ್ತಿಸಿಕೊಂಡು ಕಣ್ಣಾನೂರಿನಲ್ಲಿ ಇಳಿಸಿ ಹೋಯಿತು.

ಕ್ರಾಂತಿಕಾರಿಗಳು ಎಪ್ರಿಲ್ ಐದರಂದು ಮಂಗಳೂರನ್ನು ವಶಪಡಿಸಿಕೊಂಡರು. ಆ ದಿನಗಳಲ್ಲಿ ಕೆಲವು ಬೆಂಕಿ ಹಚ್ಚುವ ಪ್ರಸಂಗಗಳು, ದರೋಡೆ, ಲೂಟಿಗಳು ನಡೆದರೂ ಕ್ರಾಂತಿಕಾರಿಗಳು ಒಂದು ಸ್ಥಾಪಿತ ಸರಕಾರದಂತೆ ನಡೆದುಕೊಂಡರೆಂದು ಲೆವಿನ್‌ನ ವರದಿಗಳು ತಿಳಿಸುತ್ತವೆ. ಮೂಲ್ಕಿ, ಪಣಂಬೂರುಗಳಲ್ಲಿಯೂ ಲೂಟಿಗಳು ನಡೆದವು.

ಈ ಮಧ್ಯೆ ಲೆವಿನ್ ಎಪ್ರಿಲ್ ನಾಲ್ಕರಂದು ನೆರೆ





ಹೊರೆಯ ಜಿಲ್ಲೆಗಳ ಬ್ರಿಟಿಷ್ ಸೈನ್ಯಗಳಿಗೆ ಸಹಾಯ ಕೋರಿ ಪತ್ರಗಳನ್ನು ಕಳುಹಿಸಿದ್ದ. ಕಣ್ಣಾನೂರು ಮತ್ತು ಮುಂಬಯಿಗಳಿಂದ ಬ್ರಿಟಿಷರ ಸೈನ್ಯಗಳು ಮಂಗಳೂರಿಗೆ ತಲುಪಿದವು. ಎಪ್ರಿಲ್ 16 ರಂದು ಬ್ರಿಟಿಷ್ ಅಧಿಕಾರಿಗಳು ಮಂಗಳೂರಿನಲ್ಲಿ ಸಭೆ ನಡೆಸಿದರು. ಕ್ರಾಂತಿಕಾರಿಗಳು ಬ್ರಿಟಿಷರ ಮರುದಾಳಿಯನ್ನು ನಿರೀಕ್ಷಿಸದೆ ಬೇರೆ ಬೇರೆ ಊರುಗಳಲ್ಲಿ ಸರಕಾರ ಸ್ಥಾಪನೆಗಾಗಿ ಪ್ರಯತ್ನನಡೆಸಿದ್ದರು. ಬ್ರಿಟಿಷರು ಮಂಗಳೂರಿನಲ್ಲಿ ಕ್ರಾಂತಿಕಾರಿಗಳ ಧ್ವಜವನ್ನಿಳಿಸಿ ತಮ್ಮ ಧ್ವಜವನ್ನೇರಿಸಿದರು. ಅಲ್ಲಿಂದ ಪೂರ್ವಕ್ಕೆ ದಂಡಯಾತ್ರೆ ನಡೆಸಿ ಎಪ್ರಿಲ್ 29 ರಂದು ಬೆಳ್ಳಾರೆಯನ್ನು ವಶಪಡಿಸಿಕೊಂಡರು. ಅತ್ತ ಕೊಡಗಿನಿಂದ ಬೋಪು ದಿವಾನನ ಸೈನ್ಯ ಬಂದು ಸುಳ್ಯವನ್ನು ವಶಪಡಿಸಿಕೊಂಡಿತು.

## ಬಂಧನ-ಶಿಕ್ಷೆ

ಬ್ರಿಟಿಷರು ಸದರಿ ಕ್ರಾಂತಿ ನಾಯಕನನ್ನು ಹಿಡಿದು ಕೊಟ್ಟವರಿಗೆ ಬಹುಮಾನವನ್ನು ಸಾರಿದರು. ಮೇ 13 ರಂದು ಕಲ್ಯಾಣಸ್ವಾಮಿ (ಪುಟ್ಟ ಬಸಪ್ಪ) ಮತ್ತಿತರ ನಾಯಕರನ್ನು ಬಂಧಿಸಲಾಯಿತು. ಅವರ ವಿಚಾರಣೆ ಮಂಗಳೂರಿನಲ್ಲಿ ನಡೆಯಿತು. ಲಕ್ಷ್ಮಪ್ಪ ಬಂಗರಸನನ್ನು 25.5:1837 ರಂದು, ಉಪ್ಪಿನಂಗಡಿ ಮಂಜು ಎಂಬವನನ್ನು 30 ರಂದು ಮತ್ತು ಕಲ್ಯಾಣಸ್ವಾಮಿ (ಪುಟ್ಟ ಬಸಪ್ಪ)ಯನ್ನು ಜೂನ್ 19 ರಂದು ಮಂಗಳೂರಿನ ಬಿಕರ್ನಕಟ್ಟೆಯಲ್ಲಿ ಗಲ್ಲಿಗೇರಿಸಲಾಯಿತು. ಬೀರಣ್ಣ ಬಂಟನಿಗೆ 'ಮರಣಾಂತ' ಶಿಕ್ಷೆ (?) ವಿಧಿಸಲಾಯಿತು. ಗುಡ್ಡೆ ಮನೆ ಅಪ್ಪಯ್ಯನನ್ನು ಮಡಿಕೇರಿಯಲ್ಲಿ ಗಲ್ಲಿಗೇರಿಸಲಾಯಿತು ಉಳಿದವರಿಗೆ ಆಜೀವ ಶಿಕ್ಷೆ, ಕೆಲವು ವರ್ಷಗಳ ಕಠಿಣ ಸಜೆಗಳನ್ನು ವಿಧಿಸಲಾಯಿತು. ಪುಟ್ಟಯ್ಯ, ಮುನೆಯಪ್ಪ, ಬಂಗಾರಿ ಹಾಗೂ ಮತ್ತಿಬ್ಬರು ವಿಚಾರಣಾಧೀನ ಖೈದಿಗಳಾಗಿದ್ದಾಗ (ಬಹುಶಃ ಪೊಲೀಸ್ ದೌರ್ಜನ್ಯದಿಂದ) ಸತ್ತರು. ವಿಚಾರಣೆಗೊಳಗಾಗಿ ಶಿಕ್ಷೆ ಪಡೆದವರ ಕೆಲವು ಹೆಸರುಗಳು ಹೀಗಿವೆ. ಪುಟ್ಟ ಗೌಡ,

ಕರ್ತು ಕುಡಿಯ, ಚಿಟ್ಟಿ ಕುಡಿಯ, ಮಣೇಗಾರ ನಾರ್ಣಪ್ಪ, ಪುಂಡಶೆಟ್ಟಿ, ವೆಂಕಟ ಅಮೀನ್, ಷೇಕ್, ಪಟೇಲ ಶಂಕರನಾರಾಯಣ, ಅಣ್ಣಪ್ಪ, ತ್ಯಾಂಪಗೌಡ ಇತ್ಯಾದಿ.

ಬೋಪಣ್ಣ ಮತ್ತು ಕೊಡಗಿನ ವೀರರಿಗೆ ಬ್ರಿಟಿಷರು ಜಹಗೀರುಗಳನ್ನು, ಚಿನ್ನದ ಪದಕಗಳನ್ನೂ ನೀಡಿದರು. ದಕ್ಷಿಣ ಕನ್ನಡದ ಜನರಲ್ಲಿ ಅಷ್ಟು ಪ್ರಮಾಣದ ಕೋವಿಗಳಿದ್ದುದು ಅವರಿಗೆ ಆಶ್ಚರ್ಯವನ್ನುಂಟು ಮಾಡಿತ್ತು. ಮುಂದೆ ಆಯುಧಗಳ ನಿಷೇಧ ಕಾನೂನು ಮಾಡಿದಾಗ ಈ ಕಾನೂನು ಕೊಡಗಿನವರಿಗೆ ಅನ್ವಯ ಆಗುವುದಿಲ್ಲವೆಂದು ಆದೇಶ ಹೊರಡಿಸಿ ಬ್ರಿಟಿಷರು ಕೊಡಗಿನವರ ಉಪಕಾರವನ್ನು ಸ್ಮರಿಸಿಕೊಂಡರು. ಈ ಸ್ವಾತಂತ್ರ್ಯ ಹೋರಾಟದ ನಂತರ ಬ್ರಿಟಿಷರು ದಕ್ಷಿಣ ಕನ್ನಡದ ಗೌಡ ಜನಾಂಗದವರಿಗೆ ಮತ್ತು ಸ್ಥಾನಿಕ ಬ್ರಾಹ್ಮಣರಿಗೆ ಹೆಚ್ಚಿನ ಅವಕಾಶಗಳನ್ನು ಕೊಡದೆ ಅವರ ಅವನತಿಗೆ ಕಾರಣರಾದರೆಂಬ ಅಭಿಪ್ರಾಯವಿದೆ.

ಹೀಗೆ ಈ ದಕ್ಷಿಣ ಕನ್ನಡದ ಸ್ವಾತಂತ್ರ್ಯ ಸಮರ ಒಂದು ಮಹತ್ವದ ವಿದ್ಯಮಾನವಾಗಿದೆ. ಇದನ್ನು 'ಕೊಡಗು-ಕೆನರಾ ಬಂಡಾಯ', 'ಕಲ್ಯಾಣಪ್ಪನ ಕಾಟಕಾಯಿ', 'ಅಮರ ಸುಳ್ಯದ ಸ್ವಾತಂತ್ರ್ಯ ಸಮರ' ಮುಂತಾಗಿ ತಮ್ಮ ತಮ್ಮ ಅರ್ಥೈಸುವಿಕೆಗೆ ಅನುಸಾರವಾಗಿ ಜನರು ಕರೆಯುತ್ತಾರೆ. ಸಾಹಿತಿ ನಿರಂಜನರು ಈ ಹೋರಾಟದ ವಸ್ತುವನ್ನಿಟ್ಟುಕೊಂಡು 'ಕಲ್ಯಾಣಸ್ವಾಮಿ' ಎಂಬ ಕಾದಂಬರಿಯನ್ನು ಬರೆದಿದ್ದಾರೆ. ಅವರು ಕಾದಂಬರಿ ಬರೆದಾಗ ಅವರಿಗೆ ಹೋರಾಟದ ಸಮಗ್ರ ಮಾಹಿತಿ ಲಭಿಸಿರಲಿಕ್ಕಿಲ್ಲ. ಈಗ ಈ ಬಗ್ಗೆ ಹಲವು ಲೇಖನಗಳು, ದಾಖಲೆಗಳು ಸಿಗುವುದರಿಂದ ನಾವು ಇದನ್ನು ಸ್ಪಷ್ಟ ಬೆಳಕಿನಲ್ಲಿ ಕಂಡು, ಸರಿಯಾದ ಹೆಸರಿನಿಂದ ಕರೆಯಬಹುದಾಗಿದೆ.

-(ಸಹಾಯ: ಪ್ರಭಾಕರ ನೀರ್‌ಮಾರ್ಗ)

## ಕಂಪಿನೋಲೆ

ಕುಸುಮ ಕನ್ಯೆ
ಕಳುಹಲು "ಕಂಪಿನೋಲೆ"....
ಒಗ್ಗೊಟ್ಟು ಬಂದಾ...."ನಲ್ಲಾ"
ಬೀರಿತಲ್ಲಾ....
ಇಡೀ....ಹೂದೋಟ
ಸಾರ್ಥಕತೆಯ ನೋಟ!

✶ ಪೂರ್ಣಿಮಾ ಆಗುಂಬೆ



# ಚಿಕಿತ್ಸಾ ನಾಸ್ತಿ ನಿಷ್ಫಲಾ

ಒಂದು ಸಾಯಂಕಾಲ ನಾನು ನನ್ನ ಚಿಕಿತ್ಸಾಲಯದಲ್ಲಿ ಕಾರ್ಯನಿರತನಾಗಿದ್ದಾಗ ಗಂಭೀರ ಸ್ಥಿತಿಯಲ್ಲಿದ್ದ ಪಕ್ಕದ ಹಳ್ಳಿಯ ಸಾಧಾರಣ, ಅರವತ್ತು ವರ್ಷದ ರೋಗಿಯೊಬ್ಬನನ್ನು ಕರೆತಂದರು. ಅವರ ಬಾಯಿಯಲ್ಲಿ ಮುಂದಿನ ಮೇಲಿನ ಸಾಲಿನ ನಾಲ್ಕು ಕೃತಕ ಹಲ್ಲುಗಳ ತುಂಡು ಅದು ಹೇಗೋ ಜಾರಿ ಹೋಗಿ ಉಸಿರಾಟದ ನಲಿಕೆಯಲ್ಲಿ ಸಿಕ್ಕಿ ಹಾಕಿಕೊಂಡಿತ್ತು. ವೃದ್ಧರು ಉಸಿರಾಡಲು ಪಡುತ್ತಿರುವ ಸಂಕಟವು ಗಾಬರಿ ಹುಟ್ಟಿಸುವಂತೆ ಆಗಿತ್ತು. ರೋಗಿಯ ತುಟಿಗಳು ಹಾಗೂ ನಾಲಿಗೆ ನೀಲವರ್ಣಕ್ಕೆ ತಿರುಗಿದ್ದವು.

ಕೂಡಲೆ ಅವರ ಗಂಟಲನ್ನು ಪರೀಕ್ಷಿಸಿದೆ. ಆ ಕೃತಕ ಹಲ್ಲುಗಳ ತುಂಡು ಅವರ ಶ್ವಾಸನಲಿಕೆಯಲ್ಲಿ ಸಿಕ್ಕಿ ಹಾಕಿಕೊಂಡಿತ್ತು. ಅದರ ಸ್ವಲ್ಪ ಭಾಗವು ಮಾತ್ರ ಕಾಣಿಸುತ್ತಿತ್ತು. ಅದನ್ನು ತೆಗೆಯುವುದು ನನ್ನಿಂದ ಆಗಲಾರದು ಎಂದು ನಿರ್ಧರಿಸಿದೆನು. ಅದನ್ನು ತೆಗೆಯುವ ಪ್ರಯತ್ನ ಮಾಡುವ ಮುಂದೆ ಸ್ವಲ್ಪ ಹೆಚ್ಚು ಕಡಿಮೆಯಾಗಿ ಅದು ಜಾರಿದರೆ ಶ್ವಾಸೋಚ್ಛ್ವಾಸವು ಪೂರ್ಣ ನಿಂತು, ಅವರು ಮರಣ ಹೊಂದುವ ಭೀತಿಯು ಇದ್ದಿತು. ನಾನು ವಿದ್ಯಾರ್ಥಿಯಾಗಿದ್ದಾಗ ಪ್ರತ್ಯಕ್ಷವಾಗಿ ನೋಡಿದ ಘಟನೆಯ ನೆನಪಾಯಿತು. ಆರೇಳು ವ[illegible] ಮಗುವಿನ ಗಂಟಲದಲ್ಲಿ ಕೈ ಗುಂಡಿಯೊಂದು ಸಿಕ್ಕಿಹಾಕಿಕೊಂಡಿತು. ಎಕ್ಸರೇ ಕೋಣೆಯಲ್ಲಿ

